# ಕರ್ನಾಟಕ ವಿಧಾನ ಪರಿಷತ್

ಮಾನ್ಯ ವಿಧಾನ ಪರಿಷತ್ತ ಸದಸ್ಯರ ಹೆಸರು : ಶ್ರೀ ಆರ್.ಧರ್ಮಸೇನ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಚುಕ್ಕೆ ಗುರುತಿಲ್ಲದ ಪ್ರಶ್ನೆ : 719
ಉತ್ತರಿಸಬೇಕಾದವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು
ಉತ್ತರಿಸಬೇಕಾದ ದಿನಾಂಕ : 17.09.2021

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಇದುವರೆಗೆ ಎಷ್ಟು ದೇವದಾಸಿಯರನ್ನು ಗುರುತಿಸಲಾಗಿದೆ: ಅವರಿಗಾಗಿ ಯಾವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ; (ವಿವರ ನೀಡುವುದು) | • 1993–94 ಮತ್ತು 2007–08ನೇ ಸಾಲುಗಳಲ್ಲಿ ನಡೆಸಲಾದ ಸಮೀಕ್ಷೆಯಲ್ಲಿ ರಾಜ್ಯದ 14 ಜಿಲ್ಲೆಗಳಲ್ಲಿ ಒಟ್ಟು 46,660 ಮಾಜಿ ದೇವದಾಸಿ ಮಹಿಳೆಯರನ್ನು ಗುರುತಿಸಲಾಗಿದೆ.<br><br>• ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಿಂದ ಹಮ್ಮಿಕೊಂಡಿರುವ ಕಾರ್ಯಕ್ರಮಗಳ ವಿವರ ಇಂತಿದೆ.<br><br>1. **ಮಾಜಿ ದೇವದಾಸಿ ಮಹಿಳೆಯರ ಪುನರ್ವಸತಿ ಯೋಜನೆ:–** ಮಾಜಿ ದೇವದಾಸಿ ಮಹಿಳೆಯರನ್ನು ಆರ್ಥಿಕವಾಗಿ ಸಬಲೀಕರಣಗೊಳಿಸಲು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ಮೂಲಕ ರೂ.30,000/– ಪ್ರೋತ್ಸಾಹಧನವನ್ನು ನೀಡಲಾಗುತ್ತಿದೆ.<br><br>ದೇವದಾಸಿ ನಿಷೇಧ ಕಾಯ್ದೆ ಬಗ್ಗೆ ಬೀದಿ ನಾಟಕ, ಜಾತ್ರಾ ಜಾಗೃತಿ ಶಿಬಿರಗಳು, ಗೋಡೆ ಬರಹ, ಕರಪತ್ರ ಹಂಚುವಿಕೆ ಮತ್ತು ರ್‍ಯಾಲಿಗಳನ್ನು ಹಮ್ಮಿಕೊಳ್ಳುವುದರ ಮೂಲಕ ವ್ಯಾಪಕ ಪ್ರಚಾರ ನೀಡಲಾಗುತ್ತಿದೆ. ಜಿಲ್ಲಾಡಳಿತ ಹಾಗೂ ಪೋಲಿಸ್ ಇಲಾಖೆ ಸಹಕಾರದೊಂದಿಗೆ ಜಾತ್ರೆ ಸಮಯದಲ್ಲಿ ಈ ಆಚರಣೆ ಮಾಡದಂತೆ ಜಾಗೃತಿ ಮೂಡಿಸಲಾಗುತ್ತಿದೆ.<br><br>ಆರೋಗ್ಯ ತಪಾಸಣಾ ಶಿಬಿರಗಳು ಹಾಗೂ ಕಾನೂನು ಅರಿವು ಶಿಬಿರಗಳನ್ನು ಆಯೋಜಿಸಲಾಗುತ್ತಿದೆ.<br><br>2. **ಮಾಜಿ ದೇವದಾಸಿಯರಿಗೆ ಮಾಸಾಶನ ಯೋಜನೆ:–** 45 ವರ್ಷ ಮೇಲ್ಪಟ್ಟ ಮಾಜಿ ದೇವದಾಸಿಯರಿಗೆ ಮಾಸಿಕ ರೂ.1,500/–ಗಳ ಮಾಸಾಶನವನ್ನು ನೀಡಲಾಗುತ್ತಿದೆ.<br><br>3. **ಮಾಜಿ ದೇವದಾಸಿ ಮಹಿಳೆಯರಿಗೆ ವಸತಿ ಯೋಜನೆ:–** ನಿವೇಶನ ಹೊಂದಿರುವ ವಸತಿ ರಹಿತ ಮಾಜಿ ದೇವದಾಸಿ ಮಹಿಳೆಯರಿಗೆ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಮುಖಾಂತರ ವಸತಿ ನಿರ್ಮಾಣಕ್ಕೆ ಕ್ರಮ ವಹಿಸಲಾಗುತ್ತಿದೆ. |

| | | |
|---|---|---|
| ಆ) | ಎಷ್ಟು ದೇವದಾಸಿಯರಿಗೆ ಪುನರ್ವಸತಿ ಕಲ್ಪಿಸಲಾಗಿದೆ; ಇನ್ನೂ ಎಷ್ಟು ಜನರಿಗೆ ಕಲ್ಪಿಸಬೇಕಾಗಿದೆ: (ವಿವರ ನೀಡುವುದು) | **ದೇವದಾಸಿ ಪುನರ್ವಸತಿ ಯೋಜನೆಯಡಿಯಲ್ಲಿ** ಆದಾಯೋತ್ಪನ್ನಕತ್ತ ಚಟುವಟಿಕೆ ಕಾರ್ಯಕ್ರಮದಲ್ಲಿ ಒಟ್ಟಾರೆ 46660 ಮಾಜಿ ದೇವದಾಸಿಯರಲ್ಲಿ 2020-21ನೇ ಸಾಲಿನವರೆಗೆ 23292 ಮಾಜಿ ದೇವದಾಸಿಯರಿಗೆ ಸೌಲಭ್ಯ ಕಲ್ಪಿಸಲಾಗಿದೆ. ಪ್ರಸ್ತುತವಾಗಿ ಜೀವಂತವಿರುವ 9461 ಜನರಿಗೆ ಕಲ್ಪಿಸಬೇಕಾಗಿದೆ.<br><br>**ಮಾಜಿ ದೇವದಾಸಿ ವಸತಿ ಯೋಜನೆಯಡಿ** ನಿವೇಶನ ಹೊಂದಿರುವ 23111 ಮಾಜಿ ದೇವದಾಸಿಯರಲ್ಲಿ 2020-21ನೇ ಸಾಲಿನವರೆಗೆ 22156 ಮಾಜಿ ದೇವದಾಸಿಯರಿಗೆ ವಸತಿ ಕಲ್ಪಿಸಲಾಗಿರುತ್ತದೆ. ಬಾಕಿ 955 ನಿವೇಶನವುಳ್ಳ ಮಾಜಿ ದೇವದಾಸಿಯರಿಗೆ ವಸತಿ ಕಲ್ಪಿಸಬೇಕಾಗಿದೆ. |
| ಇ) | ದೇವದಾಸಿಯರ ಕಲ್ಯಾಣಕ್ಕಾಗಿ ಹಮ್ಮಿಕೊಂಡಿರುವ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಮೀಸಲಿಟ್ಟ ಹಾಗೂ ಖರ್ಚಾಗಿರುವ ಹಣವೆಷ್ಟು; (ಕಳೆದ ಎರಡು ವರ್ಷಗಳ ಮಾಹಿತಿ ನೀಡುವುದು) | ದೇವದಾಸಿಯರ ಕಲ್ಯಾಣಕ್ಕಾಗಿ ಹಮ್ಮಿಕೊಂಡಿರುವ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಮೀಸಲಿಟ್ಟ ಹಾಗೂ ಖರ್ಚಾಗಿರುವ ಹಣದ ವಿವರ ಈ ಕೆಳಗಿನಂತಿದೆ.<br>(ರೂ.ಲಕ್ಷಗಳಲ್ಲಿ) |

| ಯೋಜನೆಯ ಹೆಸರು | ಆಯವ್ಯಯದಲ್ಲಿ ಮೀಸಲಿಟ್ಟ ಅನುದಾನ | ಖರ್ಚಾದ ಅನುದಾನ |
|---|---|---|
| **ವರ್ಷ: 2019-20** | | |
| ದೇವದಾಸಿ ಪುನರ್ವಸತಿ ಯೋಜನೆ | 830.00 | 830.00 |
| ಮಾಜಿ ದೇವದಾಸಿಯರ ಮಾಸಾಶನ ಯೋಜನೆ | 4772.00 | 4772.00 |
| ಮಾಜಿ ದೇವದಾಸಿಯರ ವಸತಿ ಯೋಜನೆ | 1417.00 | 1417.00 |
| **ವರ್ಷ: 2020-21** | | |
| ದೇವದಾಸಿ ಪುನರ್ವಸತಿ ಯೋಜನೆ | 500.00 | 500.00 |
| ಮಾಜಿ ದೇವದಾಸಿಯರ ಮಾಸಾಶನ ಯೋಜನೆ | 5423.40 | 5423.40 |
| ಮಾಜಿ ದೇವದಾಸಿಯರ ವಸತಿ ಯೋಜನೆ | 0.00 | 0.00 |

**ಸಂಖ್ಯೆ:ಮಮಇ/84/ಮಅನಿ/2021**

Halappa BA

(ಹಾಲಪ್ಪ ಬಸಪ್ಪ ಆಚಾರ್)

ಮಾನ್ಯ ಗಣಿ ಮತ್ತು ಭೂವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು